# ಮುಂಜಾವು

ವಾರಪತ್ರಿಕೆ.

ಸಂಪಾದಕ: ಸಿರಿಮನೆ ನಾಗರಾಜ್

ರಿಜಿಸ್ಟರ್ಡ್ ನಂ. ಆರ್‌ಎನ್‌ಎಸ್ - 19

4ನೇ ವರ್ಷ 46ನೇ ಸಂಚಿಕೆ ಕೊಪ್ಪ 27-7-1986 ಭಾನುವಾರ ಬೆಲೆ 40 ಪೈಸೆ



ಮಲೆನಾಡಿನಲ್ಲಿ ಮನೆ ಮಾತಾಗಿರುವ

ಹೊಚ್ಚ ಹೊಸ ಶೋ ರೂಂ

**ಪ್ರಶಾಂತ್ ಜ್ಯೂಯೆಲರ್ಸ್**

ಚಿನ್ನ, ಬೆಳ್ಳಿ ಮತ್ತು ವಜ್ರ ಮಾರಾಟಗಾರರು

ಶ್ರೀನಿಧಿ ಶಾಪಿಂಗ್ ಕಾಂಪ್ಲೆಕ್ಸ್

ಗೋಪಿ ಸರ್ಕಲ್, ಶಿವಮೊಗ್ಗ.

ಎಲ್ಲಾ ರೀತಿಯ ನವ ನವೀನ ಮಾದರಿಯ

ಆಭರಣಗಳಿಗಾಗಿ ಭೇಟಿ ಕೊಡಿ.


# ಹೆಗ್ಗಾರುಕೊಡಿಗೆ ದರೋಡೆಕೋರರ ಬಂಧನ

**ಕೊಪ್ಪ: ಕಳೆದ ಜೂನ್ 4ರ ರಾತ್ರಿ ಹೆಗ್ಗಾರುಕೊಡಿಗೆ ಬಳಿ ನಡೆದ ದರೋಡೆ ಯತ್ನದ ಅಪರಾಧಿಗಳನ್ನು ಪೋಲೀಸರು ಪತ್ತೆಹಚ್ಚಿ ಬಂಧಿಸುವಲ್ಲಿ ಯಶಸ್ವಿಯಾಗಿದ್ದಾರೆ.**

**ಈ ಪ್ರಕರಣದ ವಿವರಗಳನ್ನು ಪರಿಶೀಲಿಸಿದರೆ, ಅಂದು ರೈತ ಕೊಳಿಗೋಡು ವೆಂಕಟೇಶರಾವ್ ತಮ್ಮ ಕೇಪಿನ ಕೋವಿಯನ್ನಾದರೂ ಹಿಡಿದುಕೊಂಡು ಬಂದು ಈ ಅಪರಿಚಿತರೊಡನೆ ಸೆಣಸುವ ಧೈರ್ಯ ಮಾಡದೇ ಹೋಗಿದ್ದಲ್ಲಿ ಇದು ಇಂಥ ಇನ್ನೂ ಹತ್ತಾರು ದರೋಡೆಗಳಿಗೆ ನಾಂದಿಯಾಗುತ್ತಿತ್ತು ಎಂಬ ಅಂಶ ದಂಗು ಬಡಿಸುತ್ತದೆ.**

**ಭಯ ಭೀತಿಯ ವಾತಾವರಣದಲ್ಲಿ....**

ದಕ್ಷಿಣ ಕನ್ನಡ ಮತ್ತು ಕಾಸರಗೋಡು ಗಳಲ್ಲಿ ಭಯ ಭೀತಿ ಹುಟ್ಟಿಸಿದ್ದ 'ಚಂದ್ರನ್' ಯಾನೆ ಸುರೇಂದ್ರ ಮತ್ತವನ ತಂಡದ ದರೋಡೆಗಳ ವರದಿಗಳು ಎಲ್ಲೆಲ್ಲೂ ಹಬ್ಬಿ, ಜನರ ರಕ್ತ ಹೆಪ್ಪುಗಟ್ಟಿಸಿದ್ದವು. ಅವರೆಲ್ಲ ಆಗಷ್ಟೇ ಬಂಧಿತರಾಗಿದ್ದರೂ ಮಲೆನಾಡಿನ ಈ ಭಾಗದ ಉದ್ದಗಲಕ್ಕೂ ದರೋಡೆಯ ವದಂತಿಗಳು ಹರಿದಾಡಿ ಜನ ಜೀವ ಎಡಗೈಲಿ ಹಿಡಿದುಕೊಂಡು ಸತ್ತು ಸತ್ತು ಬದುಕುತ್ತಿದ್ದರು.

ಅಂಥದೇ ಒಂದು ರಾತ್ರಿ ಈ ಪ್ರಕರಣ ನಡೆದು ಮಲೆನಾಡು ನಡುಗಿತು!....

ಕೊಗ್ರೆಯ ರಮೇಶ ಹಾಗೂ ಉಡುಪಿಯವರಾದ ಶಿವರಾಮ, ರಮೇಶ, ಸಿರಾಜ್ —ಈ ನಾಲ್ವರು ಆರೋಪಿಗಳು. ಇವರ ಪೈಕಿ ಮೂವರು ಸಿಕ್ಕಿಬಿದ್ದಿದ್ದು ಸಿರಾಜ್ ಇನ್ನೂ ಪತ್ತೆಯಾಗಿಲ್ಲ. ಆರೋಪಿಗಳನ್ನು ನ್ಯಾಯಾಲಯಕ್ಕೆ ಹಾಜರ್ಪಡಿಸಲಾಗಿ ನ್ಯಾಯಾಂಗ ಬಂಧನಕ್ಕೆ ಒಪ್ಪಿಸಲಾಗಿದೆ.

ಈ ಪ್ರಕರಣದ ಪತ್ತೆಯಲ್ಲಿ ಪ್ರಮುಖ ಸುಳಿವು ಸಂಗ್ರಹಿಸಿದ ಹರಿಹರಪುರ ಠಾಣೆಯ ಕಾನ್‌ಸ್ಟೇಬಲ್ ತುಕ್ರಪ್ಪ, ಆರಂಭದ ಅತಿ ಕಷ್ಟದ ತನಿಖೆ ನಡೆಸಿದ ಸ. ಠಾ. ಪುರ ಸ|| ಇ|| ಬಿ.ಜೆ. ಭಂಡಾರಿ ಹಾಗೂ ಇತರ ಪೋಲೀಸರನ್ನು, ಜೂನ್ 13ರ ನಂತರ ತನಿಖೆಯ ಹೊಣೆ ಹೊತ್ತು ಯಶಸ್ವಿಯಾದ ಸರ್ಕಲ್ ಇನ್‌ಸ್ಪೆಕ್ಟರ್ ವೈ. ಡಿ. ಕೇಶವಾನಂದ ಶ್ಲಾಘಿಸಿದ್ದಾರೆ.

(ಪ್ರಕರಣದ ವಿವರ ವಿಶೇಷ ಒಳಪುಟದಲ್ಲಿ)

## ವಿದೇಶಕ್ಕೆ ಹೋಗಲುರೋಟರಿ ಸ್ಕಾಲರ್‌ಶಿಪ್

ಕೊಪ್ಪ: ರೋಟರಿ ಇಂಟರ್‌ನ್ಯಾಶನಲ್‌ನ ಜಿಲ್ಲೆ 318ರ ವತಿಯಿಂದ 3 ಜನ ಪದವೀಧರರಿಗೆ ಉನ್ನತ ವ್ಯಾಸಂಗಕ್ಕಾಗಿ ವಿದೇಶಕ್ಕೆ ಹೋಗಲು ಸ್ಕಾಲರ್‌ಶಿಪ್ ನೀಡಲಾಗುವುದು. B.Sc. (Ag.) ಆದವರಿಗೆ 2 ಅಥವಾ 3 ವರ್ಷದ ಸ್ಕಾಲರ್‌ಶಿಪ್; B.Sc. ಅಥವಾ ಬೇರೆ ಪದವೀಧರರಿಗೆ M.Sc. ಅಥವಾ Ph.D. ಮಾಡಲು 1 ವರ್ಷದ ಸ್ಕಾಲರ್‌ಶಿಪ್.

B.Sc. ಮತ್ತಿತರ ಪದವೀಧರರಿಗೆ 18 ರಿಂದ 30 ವರ್ಷ, ಕೃಷಿ ಪದವೀಧರರಿಗೆ 21 ರಿಂದ 50 ವರ್ಷ ವಯೋಮಿತಿ ಇರುತ್ತದೆ.

ಹೆಚ್ಚಿನ ವಿವರಗಳನ್ನು ಕೊಪ್ಪ ರೋಟರಿ ಅಧ್ಯಕ್ಷ ಕೆ.ಎಸ್. ಶಾಂತಾರಾಂ ಅವರಿಂದ ಪಡೆಯಬಹುದು. ಅರ್ಜಿಯನ್ನು ಕೊಪ್ಪ ರೋಟರಿ ಕ್ಲಬ್ ಮೂಲಕ ಕಳಿಸಬೇಕಾಗುತ್ತೆ.

## ರೋಟರಿ ಜಿಲ್ಲಾ ಗೌರ್ನರ್ ಭೇಟಿ : ಪ್ರತಿಭಾವಂತ ವಿದ್ಯಾರ್ಥಿಗಳಿಗೆ ಸನ್ಮಾನ

ಕೊಪ್ಪ: ರೋಟರಿ (ಜಿಲ್ಲೆ 318) ಜಿಲ್ಲಾ ಗೌರ್ನರ್ ಡಾ|| ಆರ್. ಡಿ. ಪ್ರಭು ತಮ್ಮ ಪತ್ನಿ ಉಷಾರವರೊಂದಿಗೆ ಇಲ್ಲಿನ ರೋಟರಿ ಕ್ಲಬ್‌ಗೆ ಜು. 21ರಂದು ಅಧಿಕೃತ ಭೇಟಿ ಕೊಟ್ಟು ಸದಸ್ಯರೊಂದಿಗೆ ವಿಚಾರ-ವಿಮರ್ಶೆ ನಡೆಸಿದರು.

ಸಂಜೆ, ಕೊಪ್ಪ-ಶಿವಮೊಗ್ಗ ರಸ್ತೆಯ ಬಾಳಗಡಿ ತಿರುವಿನ ಬಳಿ ರೋಟರಿ ಕ್ಲಬ್ ನಿರ್ಮಿಸಿರುವ ಬಸ್ ಶೆಲ್ಟರ್ ಉದ್ಘಾಟಿಸಿದ ಅವರು, ನಂತರ ಸರ್ಕಾರಿ ಆಸ್ಪತ್ರೆಗೆ ಭೇಟಿ ನೀಡಿ, ರೋಗಿಗಳಿಗೆ ಹಣ್ಣುಗಳನ್ನು ನೀಡಿದರು.

ಸಂಜೆ ಕ್ಲಬ್ ಅಧ್ಯಕ್ಷ ಕೆ. ಎಸ್. ಶಾಂತಾರಾಂ ಅಧ್ಯಕ್ಷತೆಯಲ್ಲಿ ನಡೆದ ಸಮಾರಂಭದಲ್ಲಿ 8 ಜನ ಹೊಸ ಸದಸ್ಯರನ್ನು ಗೌರ್ನರ್ ರವರು ಕ್ಲಬ್ಬಿಗೆ ಸೇರಿಸಿಕೊಂಡರು.

ಕೊಪ್ಪ ತಾ||ನಲ್ಲಿ ಕಳೆದ ಪರೀಕ್ಷೆಗಳಲ್ಲಿ ಎಸ್ಸೆಸ್ಸೆಲ್ಸಿ ಮತ್ತು ಪಿಯುಸಿಯಲ್ಲಿ ಅತಿ ಹೆಚ್ಚು ಅಂಕ ಗಳಿಸಿದ ತಲಾ ಇಬ್ಬಿಬ್ಬರು ವಿದ್ಯಾರ್ಥಿಗಳಿಗೆ ಉಷಾರವರು ಪ್ರೋತ್ಸಾಹ ಬಹುಮಾನಗಳನ್ನು ಕೊಟ್ಟು ಸನ್ಮಾನಿಸಿದರು.

ಬಸ್ ಶೆಲ್ಟರ್ ಕಟ್ಟಿಸಿದ ಕಂಟ್ರಾಕ್ಟರ್ ದಯಾನಂದ, ಕಾರ್ಮಿಕ ಮುರುಗೇಶ್ ರನ್ನೂ ಸನ್ಮಾನಿಸಲಾಯ್ತು.

ಸಭೆಯಲ್ಲಿ ಡಾ|| ಪ್ರಭು, ಎಚ್.ಪಿ. ಗೋವಿಂದೇಗೌಡ, ಲಯನ್ ವಸಂತ ಅಜಿಲಮಾತನಾಡಿದರು. ಶ್ರೀನಿವಾಸನಾಯ್ಕ್ ವಂದಿಸಿದರು.

## ಎಲ್ಲೈಸಿ ಪಾಲಿಸಿದಾರರ ಕೌನ್ಸಿಲ್ಲಿಗೆ ರಮೇಶ ರಾವ್ ಆಯ್ಕೆ

ಕೊಪ್ಪ: ಜೀವ ವಿಮಾ ಕಾರ್ಪೊರೇಶನ್ ಉಡುಪಿ ವಿಭಾಗದ ಪಾಲಿಸಿದಾರರ ಕೌನ್ಸಿಲ್‌ಗೆ ಶಂಕರ್ ಕಂವೆನಿಯ ಮಾಲೀಕ ವರ್ಗದ ಎ. ರಮೇಶರಾವ್ ಸದಸ್ಯರಾಗಿ ಆಯ್ಕೆಯಾಗಿದ್ದಾರೆ. ಈಭಾಗದಪಾಲಿಸಿದಾರರ ಹಲವು ಕುಂದು-ಕೊರತೆ, ಸಮಸ್ಯೆಗಳನ್ನು ಅದಕ್ಕಾಗಿರುವ ಈ ವೇದಿಕೆಯಲ್ಲಿ ಚರ್ಚೆಗೆ ಎತ್ತಿ ಪರಿಹರಿಸುವ ದಿಕ್ಕಿನಲ್ಲಿ ಇವರ ಆಯ್ಕೆ ಒಂದು ಮಹತ್ವದ ಕೊಡುಗೆಯಾಗಲಿದೆಯೆಂದು ಎಲ್ಲೈಸಿ ಮೂಲಗಳ ಆಶಯವಾಗಿದೆ. ಅಂತೆಯೇ, ಕೊಪ್ಪದಲ್ಲಿ ಎಲ್ಲೈಸಿಯ ಒಂದು ಶಾಖೆ ತೆರೆಯಬೇಕೆಂಬ ಬಹು ದಿನಗಳ ಬೇಡಿಕೆಯೂ ಬೇಗನೆ ಈಡೇರುವ ಆಸೆ ಕೂಡ ಇದರಿಂದ ಚಿಗುರೊಡೆದಿದೆ.

## ಸ್ವಾತಂತ್ರ್ಯೋತ್ಸವಕ್ಕೆ ಸಿದ್ಧತೆ

ಕೊಪ್ಪ: ಸ್ವಾತಂತ್ರ್ಯ ದಿನಾಚರಣೆ ಆಚರಿಸುವ ಕುರಿತು ತಹಸೀಲ್ದಾರ್ ಕಚೇರಿಯಲ್ಲಿ ವಿವಿಧ ಇಲಾಖೆ ಅಧಿಕಾರಿಗಳ ಮತ್ತು ನಾಗರಿಕರ ಸಭೆ ಜು. 25ರಂದುನಡೆಯಿತು.

ಅಂದು ಬೆಳಿಗ್ಗೆ 10 ಗಂಟೆಗೆ ವಿವಿಧ ಇಲಾಖೆಗಳ ಸಾಧನೆಗಳ ವಸ್ತುಪ್ರದರ್ಶನ ಮತ್ತು ಸೌಲಭ್ಯಗಳ ವಿತರಣೆ ಸಹ ನಡೆಯಲಿವೆ.

## ವೃತ್ತಿ ತರಬೇತಿ : ಅರ್ಜಿ ಸಲ್ಲಿಸಲು ಅವಧಿ ವಿಸ್ತರಣೆ

ಕೊಪ್ಪ: ಜಿಲ್ಲಾ ಕೈಗಾರಿಕಾ ಕೇಂದ್ರದ ಆಶ್ರಯದಲ್ಲಿ ಗ್ರಾಮೀಣ ಕುಶಲ ಕರ್ಮಿ ಯೋಜನೆ, ವಿಶೇಷ ಘಟಕ ಯೋಜನೆ ಮತ್ತು ಗಿರಿಜನ ಉಪ ಯೋಜನೆಗಳನ್ವಯ ವಿವಿಧ ಕಸುಬುಗಳಲ್ಲಿ ತರಬೇತಿ ನೀಡಿಕೆಗಾಗಿ ಅರ್ಜಿ ಸಲ್ಲಿಸಲು **ಕೊನೆಯ ದಿನಾಂಕವನ್ನು 8-8-86ಕ್ಕೆ** ವಿಸ್ತರಿಸಲಾಗಿದೆ. ಈ ಬಗ್ಗೆ ಸಂದರ್ಶನವನ್ನು ಶೃಂಗೇರಿಯಲ್ಲಿ **11-8-86** ಮತ್ತು ಕೊಪ್ಪದಲ್ಲಿ **12-8-86** ರಂದು ನಡೆಸಲಾಗುವುದು.

ನಿಯಮಿತ ಫಾರಂನಲ್ಲಿ ಅರ್ಜಿ ಸಲ್ಲಿಸಬೇಕು. ಹಾಗೂ ವರಮಾನ ಪತ್ರ / ಜಾತಿ ಪತ್ರಗಳನ್ನು ಲಗತ್ತಿಸಬೇಕು.

ತರಬೇತಿ ಅವಧಿ 6 ತಿಂಗಳಾಗಿದ್ದು, ಈ ಅವಧಿಯಲ್ಲಿ ಪರಿಶಿಷ್ಟ ಜನಾಂಗಗಳವರಿಗೆ ತಿಂಗಳಿಗೆ 150 ರೂ. ಮತ್ತು ಇತರರಿಗೆ ತಿಂಗಳಿಗೆ 100 ರೂ. ತರಬೇತಿ ಭತ್ಯೆ ನೀಡಲಾಗುವುದು.

ಹೆಚ್ಚಿನ ವಿವರಗಳನ್ನು ಕೊಪ್ಪ ಮತ್ತು ಶೃಂಗೇರಿ ತಾ|| ಗಳ ಕೈಗಾರಿಕಾ ವಿಸ್ತರಣಾಧಿಕಾರಿ ಮೋಹನ್ ಕುಮಾರ್‌ರವರಿಂದ ಪಡೆಯ ಬಹುದು; ಹಾಗೂ 13-7-86ರ 'ಮುಂಜಾವು' ನೋಡಬಹುದು.

(ಈ ಯೋಜನೆ ಕೊಪ್ಪ, ಶೃಂಗೇರಿ, ಮೂಡಿಗೆರೆ, ಚಿಕ್ಕಮಗಳೂರು ತಾ|| ಗಳಿಗೆ ಮಾತ್ರ.)

## ತರಬೇತಿಗೆ ಅರ್ಜಿ ಆಹ್ವಾನ

ಚಿಕ್ಕಮಗಳೂರು: ಇಲ್ಲಿನ ಡಿ.ಎ.ಸಿ.ಜಿ. ಸಮುದಾಯ ಪಾಲಿಟೆಕ್ನಿಕ್ ವತಿಯಿಂದ ಎರಡು ತಿಂಗಳ ಕಾಲದ ಟರ್ನರ್, ಗೃಹ ವಿದ್ಯುದ್ದೀಕರಣ ತರಬೇತಿಗಳು, ಒಂದು ತಿಂಗಳ ಕಾಲದ ಕೊಳವೆ ಬಾವಿಗಳ ಜೋಡಣೆ, ದುರಸ್ತಿ ಮತ್ತು ನಿರ್ವಹಣೆ ಹಾಗೂ ಪ್ಲಾಸ್ಟಿಕ್ ಕೇಸ್ ಹೆಣಿಗೆ ತರಬೇತಿಗಳನ್ನು ನೀಡುವ ಸಲುವಾಗಿ ಅರ್ಹ ಅಭ್ಯರ್ಥಿಗಳಿಂದ ಅರ್ಜಿ ಆಹ್ವಾನಿಸಲಾಗಿದೆ.

ಏಳನೇ ತರಗತಿಯವರೆಗೆ ವ್ಯಾಸಂಗ ಮಾಡಿದ್ದು, ಉತ್ತಮ ದೇಹದಾರ್ಢ್ಯ ಹೊಂದಿರುವ ಅಭ್ಯರ್ಥಿಗಳು ದಿನಾಂಕ: 11-8-86ರಂದು ಬೆಳಿಗ್ಗೆ 10 ಘಂಟೆಗೆ ಪ್ರಿನ್ಸಿಪಾಲರ ಕೊಠಡಿಯಲ್ಲಿ ನಡೆಯುವ ಸಂದರ್ಶನಕ್ಕೆ ಹಾಜರಾಗಬಹುದು.

ಆಯ್ಕೆಯಾದ ಅಭ್ಯರ್ಥಿಗಳಿಗೆ ದಿನವೊಂದಕ್ಕೆ ಒಂದು ರೂಪಾಯಿ ಸ್ಟೈಫೆಂಡ್ ಹಾಗೂ ಉಚಿತ ವಸತಿ ಸೌಕರ್ಯ ಕಲ್ಪಿಸಲಾಗುವುದು.

## ರಾಷ್ಟ್ರೀಯ ಅಥ್ಲೆಟಿಕ್ಸ್‌ಗೆ ಜೆ. ಎಸ್. ಗೀತಾ

ಕೊಪ್ಪ: ಚಿಕ್ಕಮಗಳೂರಿನ ಕ್ರೀಡಾ ಹಾಸ್ಟೆಲ್ ವಿದ್ಯಾರ್ಥಿನಿ, ಕೊಪ್ಪದ ಜೆ.ಎಸ್. ಗೀತಾ ಬೆಂಗಳೂರಿನಲ್ಲಿ ಜು. 21 ಮತ್ತು 22ರಂದು ನಡೆದ 6ನೇ ರಾಜ್ಯ ಸೀನಿಯರ್ಸ್ ಅಥ್ಲೆಟಿಕ್ ಕೂಟದಲ್ಲಿ 3000 ಮೀ. (10 ನಿ. 50.4 ಸೆ.) ಹಾಗೂ 1500 ಮೀ. (5 ನಿ. 3.9 ಸೆ.) ಓಟಗಳಲ್ಲಿ ಪ್ರಥಮ ಸ್ಥಾನ ಪಡೆದು, ಆ. 12ರಿಂದ ನಡೆಯಲಿರುವ ರಾಷ್ಟ್ರೀಯ ಅಥ್ಲೆಟಿಕ್ ಕೂಟದಲ್ಲಿ ರಾಜ್ಯವನ್ನು ಪ್ರತಿನಿಧಿಸಲಿದ್ದಾರೆ.

ಓದುಗರ ಪತ್ರ

# ಶೃಂಗೇರಿ ಮಠದ ಸಂಸ್ಕೃತ ಪಾಠಶಾಲೆಯಲ್ಲಿ ಸಮಸ್ಯೆಗಳು ?

ಮಾನ್ಯರೆ,

ಶೃಂಗೇರಿ ಮಠದ ಆಶ್ರಯದಲ್ಲಿ ನಡೆಯುತ್ತಿರುವ "ಶ್ರೀ ಸದ್ವಿದ್ಯಾ ಸಂಜೀವಿನೀ ಸಂಸ್ಕೃತ ಮಹಾ ಪಾಠಶಾಲೆ"ಗೆ ನಾನು ಈಚೆಗೆ ಕಾರ್ಯ ನಿಮಿತ್ತ ಹೋಗಬೇಕಾಗಿ ಬಂತು. ಅಲ್ಲಿನ ಆವರಣದಲ್ಲಿ ಕುಳಿತಿದ್ದಾಗ ಸುತ್ತಮುತ್ತ ಇದ್ದ ಪಾಠಶಾಲೆಯ "ವಿದ್ಯಾರ್ಥಿ"ಗಳಿಂದ ಅಲ್ಲಿನ ವಿಷಯಗಳನ್ನು ತಿಳಿದಾಗ ಅವರಿಗೆ ಸೌಲಭ್ಯಗಳಿಗಿಂತ ತೊಂದರೆಗಳೇ ಹೆಚ್ಚಾಗಿದ್ದಂತೆ ಕಂಡಿದ್ದರಿಂದ ಈ ಬಗ್ಗೆ ಸಂಬಂಧಪಟ್ಟವರ ಗಮನ ಸೆಳೆಯುವುದಕ್ಕಾಗಿ ಈ ಪತ್ರ ಬರೆಯ ಬೇಕಾಯಿತು.

ವಿದ್ಯಾರ್ಥಿಗಳಿಗಿರುವ ತೊಂದರೆಗಳೆಂದರೆ: 1) ಊಟ ಚೆನ್ನಾಗಿಲ್ಲ; 2) ಶ್ರೀ ಮಠದ ಎಲ್ಲಾ ಅಧಿಕಾರಿಗಳಿಂದ ಬೈಗುಳ; 3) ಪಾಠಶಾಲಾ ಅಧ್ಯಕ್ಷರ, ಮುಖ್ಯೋಪಾಧ್ಯಾಯರ ಸರ್ವಾಧಿಕಾರೀ ಪ್ರವೃತ್ತಿ.

ಸಾಧಾರಣವಾಗಿ ಶೃಂಗೇರಿಯ ಸುತ್ತಮುತ್ತಲ ಹಳ್ಳಿಗಳಲ್ಲಿನ ಬಡತನದಲ್ಲಿರುವ ಬ್ರಾಹ್ಮಣರು ಏಳು, ಎಂಟು, ಒಂಬತ್ತು, ಹತ್ತನೇ ತರಗತಿಗಳಲ್ಲಿ ಫೇಲಾದ ತಮ್ಮ ಮಕ್ಕಳನ್ನು 'ಊಟದ ಖರ್ಚಾದರೂ ಹೋಗಲಿ' ಎಂದು (ಇಷ್ಟ ಇರಲಿ–ಇಲ್ಲದಿರಲಿ) ಇಲ್ಲಿ ಸೇರಿಸುವುದು ಇತ್ತೀಚಿನ ಪ್ರತೀತಿ. ಅಲ್ಲಿ ಅರ್ಧರ್ಧ ಬೆಂದ, ಅಕ್ಕಿಗಳೇ ಹೆಚ್ಚಾಗಿರುವ ಅನ್ನವನ್ನೂ, ಹಾಗೆಯೇ ಅರ್ಧರ್ಧ ಬೆಂದ ಹೋಳುಗಳು ಇರುವ ಹುಳಿಯನ್ನೂ ತಿಂದು ಅಲ್ಲೇ ಹರಿಯುವ ತುಂಗಾ ನದೀ ನೀರನ್ನು ಹೋಲುವ ಮಜ್ಜಿಗೆ ಹಾಕಿ ಊಟ ಮಾಡುವ ಈ ವಿದ್ಯಾರ್ಥಿಗಳ ಆರೋಗ್ಯ ಹೇಗಿದೆ ಎಂದು ಕೇಳುವವರು ಯಾರು?

2. 'ಶ್ರೀ ಮಠ'ದ ಅಧಿಕಾರಿಗಳಲ್ಲಿ ಯಾರಿಗೂ ಇಲ್ಲಿನ ವಿದ್ಯಾರ್ಥಿಗಳನ್ನು ಕಂಡರಾಗದು. ವಿದ್ಯಾರ್ಥಿಗಳೆಲ್ಲರೂ ಸೇರಿ ಯಾವುದಾದರೊಂದು ವಿಶೇಷ ಕಾರ್ಯಕ್ರಮ ಅಂದರೆ ಶ್ರೀ ಗುರುಗಳ ವರ್ಧಂತ್ಯುತ್ಸವ ಇತ್ಯಾದಿಗಳನ್ನು ಆಚರಿಸುತ್ತೇವೆ ಎಂದರೆ ಮಠದ ಅಧಿಕಾರಿಗಳಾರೂ ಪ್ರೋತ್ಸಾಹ ಕೊಡುವುದಿಲ್ಲ. ಇತ್ತೀಚಿಗಂತೂ ಇದು ಬಹಳ ಹೆಚ್ಚಾಗಿದೆ.

ಓದಿ ಓದಿ ಬೇಸರಗೊಂಡ ನಾಲ್ಕು ಜನ ವಿದ್ಯಾರ್ಥಿಗಳು ಸ್ವಲ್ಪ ಹೊತ್ತು ಮಾತಾಡುತ್ತಿದ್ದರೆ ಸಾಕು, ಅಡಿಗೆ ಭಟ್ಟರೂ ಸಹ "ಹೋಗಿ, ಓದಿಕೊಳ್ಳಿ!" ಎನ್ನುವಷ್ಟು ಅಧಿಕಾರ ಹೊಂದಿದ್ದಾರೆ.

ಇತ್ತೀಚೆಗೆ ಅವರು 'ಊಟ ಸರಿಯಿಲ್ಲ' ಎಂದು ಯಾರಾದರೂ ಅಧಿಕಾರಿಗಳಲ್ಲಿ ತಿಳಿಸಿದರೆ, ತಮಾಷೆಯಲ್ಲಿದ್ದರೆ, "ಏನೋ ಅಮ್ಮನವರ ಪ್ರಸಾದ ಎಂದು ತಿಂದುಬಿಡಿ!" ಎನ್ನುತ್ತಾರೆ. ಕೋಪದಲ್ಲಿದ್ದರೆ, "ಹಾಗಾದರೆ ನೀನು ಮನೆಗೇ ಹೋಗು. ನಿನಗೆ ಬೇಕಾದ ಹಾಗೆ ಬೇಯಿಸಿ ಹಾಕೋಕೆ ಇದೇನು ನಿಮ್ಮನೇನಾ?" ಎನ್ನುತ್ತಾರೆ. ಈ ಹಳ್ಳಿ ಮಕ್ಕಳ ತಂದೆ – ತಾಯಂದಿರು ಮಠದಲ್ಲಿ ಬಂದು ಕೇಳುವುದಕ್ಕೂ ಆಗುವುದಿಲ್ಲ. ಅಲ್ಲಿ ನವರಂತೂ ಸ್ವಲ್ಪವೂ ಸಹಾನುಭೂತಿ ತೋರುವುದಿಲ್ಲ. ಹೀಗಾದರೆ ಮಕ್ಕಳ ಗತಿ?

3. ಯಾವ ಮನುಷ್ಯನಿಗೇ ಆಗಲೀ ಮಾನ–ಅಪಮಾನ ಎನ್ನುವುದು ಇದ್ದೇ ಇರುತ್ತದೆ. ಈ 'ಪಾಠಶಾಲೆ'ಯಲ್ಲಿರುವವರು ಅದನ್ನು ಮಾತ್ರ ಬಿಟ್ಟಿರಬೇಕಾಗುತ್ತದೆ. ಇಲ್ಲಿನ ಈಗಿನ ಮುಖ್ಯೋಪಾಧ್ಯಾಯರು "ವಿದ್ಯಾರ್ಥಿಗಳು ನಮ್ಮ ಪಾಠಶಾಲೆಯಲ್ಲಿ ಇರಬೇಕಾದರೆ ತಲೆ ಬೋಳು ಮಾಡಿಸಬೇಕು" ಎಂಬ ಹೊಸ ಕಾನೂನನ್ನು ಈಗ್ಗೆ ಮೂರ್ನಾಲ್ಕು ವರ್ಷದಿಂದ ಜಾರಿಗೆ ತಂದಿದ್ದಾರೆ. ಹೀಗೆ 'ಬೋಳುತಲೆ'ಯ ವಿದ್ಯಾರ್ಥಿಗಳು ಮಠದಿಂದ ಹೊರಗೆ ಹೊರಟರೆ ಸಾಕು–ಶೃಂಗೇರಿಯವರೂ, ಪ್ರವಾಸಿಗರೂ ಒಂದೇ ರೀತಿಯಲ್ಲಿ— "ಏ ಹುಡುಗಾ, ಸ್ವಲ್ಪ ತಲೆಗೆ ಎಣ್ಣೆ ಹಾಕ್ಕೊಂಡು ಬಾ. ಕನ್ನಡೀನೇ ಬೇಡ" ಎನ್ನುತ್ತಾರೆ! ಇನ್ನು ಕೆಲವರು ತಲೆಯನ್ನೂ, ಅಲ್ಲಿರುವ ಚೂರು ಜುಟ್ಟನ್ನು ಮುಟ್ಟುವುದೂ ಉಂಟು !! ಇಂಥ ಶೋಚನೀಯ ಕಾರ್ಯಗಳು ಪ್ರತಿದಿನ ನಡೆಯುತ್ತಿದ್ದರೂ ಇದು ಯಾವ ಅಧಿಕಾರಿಗೂ ಗಮನಕ್ಕೆ ಬರುವುದಿಲ್ಲ.

ಶ್ರೀ ಮಠದ ಸ್ವಾಮಿಗಳವರು ಹಿಂದೆ ಮುಖ್ಯೋಪಾಧ್ಯಾಯರು ಆಡಿದ ಯಾವುದೋ ಒಂದು ಮಾತಿನಿಂದಾಗಿ ಪಾಠಶಾಲೆಗೆ ಹೋಗುವುದಿಲ್ಲ. ಇದು ಇಲ್ಲಿನ ಅಧಿಕಾರಿಗಳ ಪಾಲಿಗೆ ವರವಾಗಿದೆ. ವಿದ್ಯಾರ್ಥಿಗಳ ಮೇಲೆ ಯಾವ ಕ್ರಮ ಕೈಗೊಂಡರೂ ಕೇಳುವವರಿಲ್ಲ. ವಿದ್ಯಾರ್ಥಿಗಳಂತೂ ಎಷ್ಟು ಬಾರಿ ಹೇಳಿದರೂ 'ಕರುಣೆ' ಎಂದರೆ ಏನು ಎಂದೇ ತಿಳಿಯದ ಈ ಮಠದ ಅಧಿಕಾರಿಗಳಿಂದ ಯಾವ ಸಮಸ್ಯೆಯನ್ನೂ ಬಗೆಹರಿಸಿಕೊಳ್ಳಲಾಗಲಿಲ್ಲ.

ಇದಕ್ಕೆ ಸಂಬಂಧಪಟ್ಟ ಮೇಲಧಿಕಾರಿಗಳು ಈ ಬಗ್ಗೆ ವಿಮರ್ಶಿಸಿ, ಸುಧಾರಣಾ ಕ್ರಮಗಳನ್ನು ಕೈಗೊಳ್ಳಬೇಕಾಗಿ ವಿದ್ಯಾರ್ಥಿಗಳ ಪರವಾಗಿ ವಿನಂತಿಸುತ್ತೇನೆ.

(ಸುಪರಿಚಿತ ವ್ಯಕ್ತಿಯೊಬ್ಬರಿಂದ ಬಂದ ಈ ಪತ್ರವನ್ನು ತನಿಖೆಗಾಗಿ ನಮ್ಮ ಶೃಂಗೇರಿ ಪ್ರತಿನಿಧಿ ಕಲ್ಕುಳಿ ವಿಠಲ ಹೆಗ್ಡೆಯವರಿಗೆ ಕಳಿಸಲಾಗಿತ್ತು. ಅವರು ಮಠದ ಆಡಳಿತಾಧಿಕಾರಿ ಜಿ.ವಿ. ಗಿರಿಧರ ಶಾಸ್ತ್ರಿಗಳ ಬಳಿ ಈ ವಿಚಾರಗಳನ್ನು ಚರ್ಚಿಸಿದಾಗ ಅವರು ಕೊಟ್ಟ ಸಮಜಾಯಿಶಿಗಳನ್ನು ಇಲ್ಲಿ ಕೊಡಲಾಗಿದೆ—)

1. ಮಠದಲ್ಲಿ 'ಪ್ರಸಾದ'ವೆಂದು ಬಂದು ಊಟ ಮಾಡುವ ಭಕ್ತರಿಗೂ, ಪಾಠಶಾಲೆಯ ವಿದ್ಯಾರ್ಥಿಗಳಿಗೂ ಒಂದೇ ರೀತಿಯ ಊಟ ಬಡಿಸುವುದರಿಂದ ಊಟ ಕಳಪೆಯಿರುವುದಕ್ಕೆ ಸಾಧ್ಯವಿಲ್ಲ. ನೀವೇ ಯಾರನ್ನಾದರೂ ಊಟಕ್ಕೆ ಕಳಿಸಿ ನೋಡಿ, ಬೆಳಗಿನ ಹೊತ್ತು ಮಾತ್ರ ಗಂಜಿಯನ್ನು ಬಡಿಸಲಾಗುತ್ತದೆ. ಮಿತ ಭೋಜನ ಕೂಡ ಇಲ್ಲ.

2. ಈ ಶಾಲೆಯ ಎಲ್ಲಾ ವಿದ್ಯಾರ್ಥಿಗಳಿಗೂ ಒಂದೇ ರೀತಿಯ ಕಾನೂನು ಇದ್ದು, ಅದರ ನೀತಿಯಂತೆ ಕೇಶ (ಜುಟ್ಟು) ಬಿಡಲೇ ಬೇಕು. ಸಂಪೂರ್ಣ ತಲೆ ಬೋಳಿಸುವುದಿಲ್ಲವಾದರೂ ಅರ್ಧ ತಲೆ ಬೋಳಿಸುವ ಕಡ್ಡಾಯ ಪದ್ಧತಿ ಇರುವುದು ನಿಜ.

ಆದರೆ ಜುಟ್ಟು ಬಿಟ್ಟಿದ್ದಕ್ಕೆ ಹೀಯಾಳಿಸುತ್ತಾರೆ ಎನ್ನುವುದಾದರೆ, ನಾನು ಜುಟ್ಟು ಬಿಟ್ಟುಕೊಂಡು ಇಡೀ ಭಾರತದಾದ್ಯಂತ, ವಿಮಾನದಿಂದ ಹಿಡಿದು ಎಲ್ಲಾ ರೀತಿಯ ವಾಹನಗಳಲ್ಲೂ ಸಾರ್ವಜನಿಕರೊಂದಿಗೇ ಸಂಚರಿಸಿದ್ದೇನೆ. ಯಾರೂ ಈವರೆಗೆ ಆ ಬಗ್ಗೆ ಕೇಳಿದ್ದಾಗಲಿ, ಹೀಯಾಳಿಸಿದ್ದಾಗಲೀ ಇಲ್ಲ.

3. ಗುರುಗಳ ವರ್ಧಂತಿ ಉತ್ಸವ ವಿದ್ಯಾರ್ಥಿಗಳ ನೇತೃತ್ವದಲ್ಲೇ, ಸಾಕಷ್ಟು ಅದ್ದೂರಿಯಾಗಿಯೇ ನಡೆಯುತ್ತಿದ್ದು, ಇದಕ್ಕೆ ಮಠದಿಂದಲೂ ಸಾರ್ವಜನಿಕರಿಂದಲೂ ಸಾಕಷ್ಟು ಪ್ರೋತ್ಸಾಹ ಸಿಗುತ್ತಿದೆ.

ಅಲ್ಲದೆ, ವಿದ್ಯಾರ್ಥಿಗಳಿಂದ ನವರಾತ್ರಿಯ ಹೊರತು ಇನ್ನಾವ ಸಂದರ್ಭದಲ್ಲೂ ಕೆಲಸ ಮಾಡಿಸುವುದಿಲ್ಲ.

—ಹೀಗೆಂದು ಆಡಳಿತಾಧಿಕಾರಿ ಹೇಳುತ್ತಾರೆ.

(4ನೇ ಪುಟಕ್ಕೆ)

# "ಅರಣ್ಯ ಸಂರಕ್ಷಣೆಗೆ ಜನರ ಸಹಕಾರ ಅತ್ಯಗತ್ಯ"

—ಎ. ಸಿ. ಲಕ್ಷ್ಮಣ್

ಕೊಪ್ಪ: ಅರಣ್ಯ ಸಂಪತ್ತಿನ ರಕ್ಷಣೆಗೆ ಇಲಾಖೆ ಸಿಬ್ಬಂದಿಯ ಸಾಮರ್ಥ್ಯ ಮಾತ್ರವೇ ಸಾಕಾಗುವುದಿಲ್ಲ. ಇದಕ್ಕೆ ಸಾರ್ವಜನಿಕರ ಪೂರ್ಣ ಸಹಕಾರ ಬೇಕು ಎಂದು ಶಿವಮೊಗ್ಗ ವೃತ್ತದ ಅರಣ್ಯ ಸಂರಕ್ಷಣಾಧಿಕಾರಿ ಎ. ಸಿ. ಲಕ್ಷ್ಮಣ್ ಇಲ್ಲಿ ಹೇಳಿದರು.

ಜುಲೈ 17ರಂದು ಇಲ್ಲಿನ ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ನೂತನ ಇಲಾಖಾ ಕಟ್ಟಡದ ಉದ್ಘಾಟನಾ ಸಮಾರಂಭದ ಅಧ್ಯಕ್ಷತೆ ವಹಿಸಿ ಮಾತನಾಡಿದ ಅವರು ಕಟ್ಟಿಗೆ, ನಾಟಾ, ಮೇವು, ಸೊಪ್ಪು ಇತ್ಯಾದಿ ಅರಣ್ಯದ ಉತ್ಪತ್ತಿಗಳಿಗೆ ಕೇವಲ ಅರಣ್ಯ ಇಲಾಖೆಯನ್ನೇ ಅವಲಂಬಿಸಿಕೊಳ್ಳದೆ, ಅವಕಾಶವುಳ್ಳ ಎಲ್ಲಾ ರೈತರು, ಸಾರ್ವಜನಿಕರು, ಮರಗಳನ್ನು ಬೆಳೆಯಿಸಿದಲ್ಲಿ ನಮ್ಮ ಅವಶ್ಯಕತೆಯನ್ನು ನಾವು ಸಂಪೂರ್ಣವಾಗಿ ನೀಗಿಕೊಂಡು ಕೊರತೆಯಿಂದ ಸಮೃದ್ಧಿಯೆಡೆಗೆ ಸಾಗುವುದು ಸಾಧ್ಯ ಎಂದು ಹೇಳಿದರು. ಹಸಿರು ಕ್ರಾಂತಿ ಕೃಷಿ ಕ್ಷೇತ್ರದಲ್ಲಿ ನಡೆದಂತೆ ಅರಣ್ಯ ಕ್ಷೇತ್ರದಲ್ಲೂ ಏರ್ಪಟ್ಟಲ್ಲಿ ಮುಂದಿನ ಪೀಳಿಗೆ ಬರ ಕಾಣುವ ಬದಲು ಹಸಿರು ಕ್ರಾಂತಿಯ ಸಫಲದೂಟವನ್ನು ಕಾಣಬಹುದು ಎಂದ ಅವರು, ಪತ್ರಿಕೆಗಳು ಕೊರತೆಗಳ ಬಗ್ಗೆ ಕೇವಲ ವರದಿ ಮಾಡುವುದರ ಬದಲು, ಇದೆ ಸಂದರ್ಭದ ಅವಕಾಶವನ್ನು ಬಳಸಿಕೊಂಡು "ತಮಗೆ ಬೇಕಾಗುವ ಸೌದೆಯನ್ನು ತಾವೇ ಬೆಳೆದುಕೊಳ್ಳುವ ಮನಸ್ಸು ಮಾಡಿ" ಎಂದು ಜನರಿಗೆ ಕಿವಿಮಾತು ಹೇಳಿದಲ್ಲಿ ಅದು ಜನರ ಮೇಲೆ ಸಾಕಷ್ಟು ಪರಿಣಾಮ ಬೀರಿ ಮರ ಬೆಳೆಸುವ ಕಾರ್ಯಕ್ಕೆ ಸಹಕಾರಿಯಾಗುತ್ತದೆ ಎಂದೂ ಆಶಿಸಿದರು.

ಸೌದೆ, ನಾಟಾ ಜಾತಿಯ ನೆಡುತೋಪುಗಳನ್ನು ಬೆಳಸುವುದರೊಂದಿಗೆ ಸಾಮಾನ್ಯ ರೈತರ ಅವಶ್ಯಕತೆ ನೀಗುವ ಬಿದಿರು ಮತ್ತು ಬೆತ್ತಗಳನ್ನು ಹೆಚ್ಚಿನ ಪ್ರಮಾಣದಲ್ಲಿ ಬೆಳೆಯಿಸಲು ಇಲಾಖೆ ಹಾಕಿಕೊಂಡಿರುವ ಕಾರ್ಯಕ್ರಮದ ಬಗ್ಗೆ ವಿವರಿಸಿದ ಅವರು ಶಿವಮೊಗ್ಗ ಮತ್ತು ಚಿಕ್ಕಮಗಳೂರು ಜಿಲ್ಲೆಯಲ್ಲಿ ಈ ದಿಶೆಯಲ್ಲಿ 3,500 ಎಕರೆ ಪ್ರದೇಶಗಳಲ್ಲಿ ಬಿದಿರಿನ ಅಭಿವೃದ್ಧಿ ಕಾರ್ಯಕ್ರಮವನ್ನು ಆರಂಭಿಸಿದ್ದು, ಇದರಿಂದಾಗಿ ಈಗಾಗಲೇ ಪ್ರಕೃತಿಯಲ್ಲಿ ಬಿದಿರಿನ ವಾರ್ಷಿಕ ಬೆಳೆ ಎರಡು ಪಟ್ಟಾಗಿದೆ ಎಂದರು. ಈ ಅಭಿವೃದ್ಧಿಯನ್ನು ಇನ್ನೂ ಇಮ್ಮಡಿಗೊಳಿಸಲು ಅರಣ್ಯ ಇಲಾಖೆ ಬದ್ಧವಾಗಿದೆ ಎಂದರು.

ಇದೇ ರೀತಿ ನಶಿಸಿಹೋಗುತ್ತಿರುವ ಬೆತ್ತದ ಬೆಳೆಯನ್ನು ಅಭಿವೃದ್ಧಿ ಪಡಿಸಲು 1,500 ಎಕರೆ ಪ್ರದೇಶದಲ್ಲಿ ಬೆತ್ತದ ಅಭಿವೃದ್ಧಿಯನ್ನು ಯಶಸ್ವಿಯಾಗಿ ನಡೆಸಿರುವುದಾಗಿ ತಿಳಿಸಿದ ಅವರು ಈ ಎಲ್ಲಾ ಯೋಜನೆಗಳಿಂದಾಗಿ ಈ ಎರಡು ಬೆಳೆಗಳಲ್ಲಿ ಸಮೃದ್ಧಿ ಸಾಧಿಸುವ ಆಶಾಭಾವ ಪ್ರಕಟಿಸಿದರು.

ಇದಕ್ಕೆ ಮೊದಲು ಏಳು ಲಕ್ಷ ರೂ. ವೆಚ್ಚದ ಈ ನೂತನ ಕಟ್ಟಡವನ್ನು ಉದ್ಘಾಟಿಸಿದ ಶಾಸಕ ಗೋವಿಂದ ಗೌಡರು, ಜನರಲ್ಲಿ ಅರಣ್ಯ ನಾಶದ ಪ್ರವೃತ್ತಿ ಹೆಚ್ಚುತ್ತ ಅರಣ್ಯ ಸಂರಕ್ಷಣೆಯ ಬಗ್ಗೆ ಕಾಳಜಿ ಕಮ್ಮಿಯಾಗುತ್ತಿರುವುದಕ್ಕೆ ವಿಷಾದಿಸಿದರು.

ಅರಣ್ಯವನ್ನು ಬೆಳೆಸುವುದರ ಜೊತೆಗೆ, ರೈತರು ಇಂಧನಕ್ಕೆ ಬದಲಿ ವ್ಯವಸ್ಥೆಗಳನ್ನು (ಸಗಣಿ ಅನಿಲ ಘಟಕ, 'ಅಸ್ತ್ರ' ಒಲೆ, ಅಡಿಕೆ, ಏಲಕ್ಕಿ ಇತ್ಯಾದಿ ಒಣಗಿಸಲು ಹೀಟ್ ಚೇಂಬರ್ ಇತ್ಯಾದಿ) ಅಳವಡಿಸಿಕೊಂಡಲ್ಲಿ ಅರಣ್ಯ ನಾಶವನ್ನು ಬಹಳಷ್ಟು ತಪ್ಪಿಸಬಹುದು ಎಂದರು.

ಸಮಾರಂಭದ ಸ್ವಾಗತ ಭಾಷಣ ಮಾಡಿದ ಉಪ ಅರಣ್ಯ ಸಂರಕ್ಷಣಾಧಿಕಾರಿ ವಿನಯ್ ಲೂಥ್ರರವರು ಈ ಸಾಲಿನಲ್ಲಿ ಕೊಪ್ಪ ವಿಭಾಗದಲ್ಲಿ 1,700 ಎಕರೆಗೂ ಹೆಚ್ಚು ಪ್ರದೇಶದಲ್ಲಿ ಉರುವಲು, ತೇಗ, ಬಿದಿರು, ಬೆತ್ತದ ನೆಡುತೋಪುಗಳನ್ನು ಬೆಳೆಯಿಸುವ ಮತ್ತು ಸಾರ್ವಜನಿಕರಿಗೆ 25 ಲಕ್ಷ ಸಸಿಗಳನ್ನು ಉಚಿತವಾಗಿ ಹಂಚುವ ಗುರಿ ಹೊಂದಿರುವುದಾಗಿ ತಿಳಿಸುತ್ತಾ, ಸಾರ್ವಜನಿಕರು ಉಚಿತ ಸಸಿಗಳ ವಿತರಣೆಯ ಸದುಪಯೋಗ ಪಡೆದುಕೊಂಡು ತಮ್ಮ ತಮ್ಮ ಜಮೀನುಗಳಲ್ಲಿ ಹೆಚ್ಚು ಹೆಚ್ಚು ಮರಗಳನ್ನು ಬೆಳೆಯಿಸಿ ಲಾಭ ಪಡೆಯಲು ಕೋರಿದರು.

ಕಟ್ಟಡದ ತಾಂತ್ರಿಕ ವರದಿಯನ್ನು ಮಂಡಿಸಿದ ಅಸಿಸ್ಟೆಂಟ್ ಎಕ್ಸಿಕ್ಯೂಟಿವ್ ಇಂಜಿನಿಯರ್ ಚಿನ್ನಪ್ಪ ಹೆಗ್ಡೆಯವರು, ಗುತ್ತಿಗೆದಾರರು ಪರಸ್ಪರ ಸಹಕಾರದಿಂದ ಅರ್ಧಕ್ಕೆ ನಿಂತಿದ್ದ ಕಟ್ಟಡವನ್ನು ಪೂರೈಸಿದ್ದಕ್ಕೆ ಅವರನ್ನು ಅಭಿನಂದಿಸಿದರು. ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ ಎ. ಬಿ. ಅಪ್ಪಣ್ಣ ವಂದಿಸಿದರು.